ಕೆ.ಟಿ. ಪಾಟೀಲ

# ಶ್ರೀಮಂತಗಡ ಕೋಟೆ ಹಾಗೂ ದೇವಾಲಯ

ಶ್ರೀಮಂತಗಡ ಧಾರವಾಡ ಜಿಲ್ಲೆಯ ಶಿರಹಟ್ಟಿ ತಾಲೂಕಿನ ಒಂದು ಕೋಟೆಯಾಗಿದ್ದು, ಶಿರಹಟ್ಟಿಯಿಂದ 15ಕಿಲೋ ಮಿಟರ್ ದಕ್ಷಿಣ ದಿಕ್ಕಿಗೆ ಇರುವ ಹೆದ್ದಾರಿಯ ಪಕ್ಕದಲ್ಲಿ ದೇವಿಹಾಳ ಗ್ರಾಮ ಸಮಿಪ ಇರುವ ಗುಡ್ಡದ ಮೇಲೆ ಇದೆ. ಪುರಾತನ ಕಾಲದೊಳು ಕಪಿಲ ಮುನಿ ತಪಸ್ಸು ಮಾಡಿದ ಪುಣ್ಯ ಕ್ಷೇತ್ರವೆಂದು ಹೇಳುತ್ತಾರೆ. ಈ ಗುಡ್ಡಕ್ಕೆ ಇದರಿಂದಾಗಿ ಕಪ್ಪೆಬೆಟ್ಟವೆಂತಲೂ ಹೆಸರು. ಅನಂತರವಾಗಿ ಅಜಮಾಸ 345 ವರ್ಷಗಳ ಹಿಂದೆ (1655) ನವಾಬ (ಮಂಜಲಾಪುರ) ಅಂಕುಶಿ ಖಾನರ ವಶದಲ್ಲಿತ್ತು.ಮುಂದೆ ರಣದುಲ್ಲಾಖಾನರೆಂಬುವರನ್ನು ಮಾಂಡಲಿಕರನ್ನಾಗಿ ನೇಮಿಸಿದರು. ನಂತರ ರಣದುಲ್ಲಾಖಾನರು ಕಪ್ಪೆ ಬೆಟ್ಟವನ್ನು ತಮ್ಮ ರಾಜರ ಖಜಾನೆಯನ್ನು ಮಾಡಲು ಯೋಚಿಸಿ ಗುಡ್ಡದ ಮೇಲಿರುವ ಬಯಲು ಪ್ರದೇಶವನ್ನು ಕಲ್ಲು ಬಂಡೆಗಳನ್ನು ಒಡೆದು ಕೋಟೆ ಕಟ್ಟಲು ಪ್ರಾರಂಭವಾಯಿತು. ಇಪ್ಪತ್ತೈದು ಎಕರೆ ಅಜಮಾಸ ಒಳ ಕ್ಷೇತ್ರವನ್ನು ಇಟ್ಟು ಪೂರ್ವ ಪಶ್ಚಿಮ ಉದ್ದವಾಗಿ ಉತ್ತರ ದಕ್ಷಿಣ ಅಗಲ ಕಡಿಮೆಯಾಗಿ ಎಂಟು ಬುರುಜಗಳು, ನಾಲ್ಕು ಚಿಕ್ಕ ಮದ್ದಿನ ಮನೆಗಳನ್ನು ಹಾಗೂ ಆಯಾತಾಕಾರವಾಗಿ ಕೋಟೆಯನ್ನು ಕಟ್ಟಿದ್ದಾರೆ. ಸೈನಿಕರಿಗಾಗಿ ಗುಪ್ತ ಗೂಡುಗಳನ್ನು ಕೋಟೆಯ ಮಧ್ಯದಲ್ಲಿ ನಿರ್ಮಿಸಿದ್ದಾರೆ. ಎರಡು ಚಿಕ್ಕ ದ್ವಾರಗಳು, ದಕ್ಷಿಣ ಮುಖವಾಗಿ ಒಂದು (ಗುಪ್ತ) ಚೋರಗಂಡಿ, ಪಶ್ಚಿಮ ಮುಖವಾಗಿ ಒಂದು ದ್ವಾರ, ಹಾಗೂ ದೊಡ್ಡ ದ್ವಾರ ಉತ್ತರ ಮುಖವಾಗಿ ಮಾಡಿದ್ದಾರೆ. ಒಳಗಡೆ ಎಡಬಲಕ್ಕೆ ಸೈನಿಕರಿಗಾಗಿ ಅಂಕಣ ಕಟ್ಟೆಗಳು ಇವೆ. ನಂತರ ಮತ್ತೊಂದು ದ್ವಾರ ಒಳಗಡೆ ಇದ್ದು, ಇದರ ಎದುರುಗಡೆ ದೇವಾಲಯವಿದೆ. ಒಳಗೆ ದೇವಿಯ ಮೂರ್ತಿ ಇದೆ. ಈ ಮೂರ್ತಿಯ ಕೆಳಗಡೆ ಗುಪ್ತ ಗುಹೆ ಇದೆ. ಈ ಗುಪ್ತ ಗುಹೆಯಲ್ಲಿ ನವಾಬ ಅರಸರ ಖಜಾನೆ ಇತ್ತು. ಹಾಗೂ ನೀರಿಗಾಗಿ ಎರಡು ದೊಡ್ಡ ಹೊಂಡಗಳನ್ನು ಕಲ್ಲು ಗಚ್ಚಿನಿಂದ ಕಟ್ಟಿಸಿದ್ದವು ಇರುತ್ತದೆ. ಆನೆ ಕುದುರೆಗಳಿಗೆ ಒಂದು ಪ್ರತ್ಯೇಕ ಹೊಂಡ ಉಂಟು. ಹಾಗೂ ಸೈನಿಕರಿಗಾಗಿ ವಾಸಿಸಲು ಮನೆಗಳು ಇದ್ದವು. ಈಗ ಅವು ಬಿದ್ದು ಅವಶೇಷಗಳು ಮಾತ್ರ ಉಳಿದಿರುತ್ತದೆ. ಮರಾಠಾ ಚಕ್ರಾಧಿಪತಿ ಶಿವಾಜಿ ಮಹಾರಾಜನು, ದಂಡಿನೊಡನೆ ಉತ್ತರ ಕರ್ನಾಟಕದ ಕೋಟೆಗಳನ್ನು ವಶಪಡಿಸಿಕೊಂಡು ದಕ್ಷಿಣ ಮಾರ್ಗವಾಗಿ ಕಪ್ಪತ್ತ ಗಿರಿಯ ತಪ್ಪಲ ಪ್ರದೇಶಕ್ಕೆ ಬಂದಾಗ ತನ್ನ ಸೈನ್ಯದೊಂದಿಗೆ ಬಿಡಾರ ಬಿಟ್ಟನು. ಮುಂದೆ ದಂಡೆಯಾತ್ರೆಯನ್ನು ಮುಂದಿವರಿಸಿ ಈ ರಾಜಧಾನಿಯ ಮೇಲೆ ಯುದ್ಧಮಾಡಲು ಯೋಚಿಸಿ ರಣತೂರ ಎಂಬಲ್ಲಿ ಬಂದು ತಮ್ಮ ಠಾಣಾ ಹಾಕಿದನು. ಅಷ್ಟರೊಳಗೆ ರಣದುಲ್ಲಾಖಾನರು ಐದು ಫರ್ಲಾಂಗ ದಾರಿ ಉದ್ದಕ್ಕೂ ಸೂಜಿಗಲ್ಲು ಹಾಕಿಸಿದ್ದರು. ಶಿವಾಜಿ ಸೈನಿಕರು ಯದ್ಧಕ್ಕೆ ಸಿದ್ಧರಾಗಿ ಬರಲು ಅವರ ಕುದುರೆಗಳು ಗಪ್ಪನೆ ನಿಂತು ಬಿಟ್ಟವು. ಇದನ್ನು ಕಂಡು ಶಿವಾಜಿ ಸೈನಿಕರಿಗೆ ಆಶ್ಚರ್ಯವಾಗಿ ಮರಳಿ ತಮ್ಮ ಬಿಡಾರಕ್ಕೆ ಹಿಂದುರುಗಿದರು. ಆದ ಮೋಸದ ಪರಿಚಯವಾಗಿ ಪೂರ್ವಸಿದ್ಧತೆಮಾಡಿ ರಾಜಧಾನಿಗೆ ಮುತ್ತಿಗೆ ಹಾಕಿದರು. ಈ ಯುದ್ಧದಲ್ಲಿ ಕೊನೆಗೆ ರಣಕುಲ್ಲಾಖಾನರು ಕೂಡಾ ಮಡಿದರೆಂದು ಹೇಳುತ್ತಾರೆ. ಮುಂದೆ ಗುಡ್ಡದ ಮೇಲಿರುವ ಕೋಟೆಯನ್ನು ಮರಾಠರು ವಶಪಡಿಸಿಕೊಂಡರು. ಒಳಗಡೆ ಹೋಗಿ ನೋಡಿದರೆ ದೇವಿಯ ಗುಡಿ, ಶಿವಾಜಿ ಸೈನಿಕರಿಗೆ ಸಂತೋಷವಾಯಿತು ಇಲ್ಲಿ ಏನೋ ಚಮತ್ಕಾರ ವಿದೆಯೆಂದು ಶೋಧಿಸಲಾಗಿ ಒಳಗಡೆ ಗುಪ್ತ ಗುಹೆ ಸಿಕ್ಕಿತು. ಅದರಲ್ಲಿರುವ ಸಿರಿಸಂಪ್ಪತ್ತು ಶಿವಾಜಿ ಮಹಾರಾಜರ ವಶವಾಯಿತು.

**ಅವಶೇಷಗಳು** : ರಣದುಲ್ಲಾಖಾನರದೆನ್ನಲಾದ ಗೋರಿ ಇಂದಿಗೂ ಇವೆ. ಅವು ಸುಣ್ಣ ಬಳಿದು ದಾಖಾಲಾತೆ ಇರುವುದಿಲ್ಲ (ಅಳಿಸಿಹೋಗಿದೆ?) (ಹಾಗೂ) ಅವರ ಅರಮನೆಯ ಮುಖ್ಯ ದ್ವಾರಬಾಗಿಲುಗಳು ಬಿದ್ದು ಹೋಗಿವೆ. ದೇವಿಹಾಳ ಗ್ರಾಮದ ಹತ್ತಿರ ನೀರಾವರಿ ನಿಮಿತ್ತ ಮಾಡಲಾದ ದೊಡ್ಡ ಕೆರೆ ಉಂಟು. ಇಂದಿಗೂ ನೀರು ಮಾತ್ರ ನಿಲ್ಲುತ್ತದೆ. ಗುಡ್ಡದ ಮೇಲಿನ ಕೋಟೆ ಅಲ್ಪ ಸ್ವಲ್ಪ ಬಿದ್ದು ಉಳಿದ ಭಾಗ ಚೆನ್ನಾಗಿದೆ.

ಶಿವಾಜಿ ಮಹಾರಾಜರ ಸ್ವಾಧೀನವಾದ ನಂತರ ದೇವಿಯ ಗುಡಿಯು ಸುಂದರವಾಗಿ ಕಟ್ಟಲ್ಪಟ್ಟಿದೆ.

ಹಾಗೂ ಪ್ರತೀ ವರ್ಷ ಸಡಗರದಿಂಧ ಪ್ರತಿ ಭಾರತ ಹುಣ್ಣಿಮೆಯ ದಿನದಂದು ಜಾತ್ರೆಯಾಗುತ್ತದೆ. ಹಾಗೂ ಪ್ರತಿ ಯುಗಾದಿ ಪಾಡ್ಯದಂದು ಧ್ವಜ ಹಾರಿಸುವುದುಂಟು. ಶಿವಾಜಿ ಮಹಾರಾಜರು ಶ್ರೀಮಂತಗಡವೆಂದು ನಾಮಕರಣ ಮಾಡಿದರು. ಅಂಕುಡೊಂಕಾದ ದಾರಿ ಸುಮಾರು ಒಂದು ಕಿಲೋ ಮೀಟರ್ ದಾರಿಯಿಂದ ಗುಡ್ಡ ಹತ್ತಲು ಮುಂದೆ ಕೋಟೆ ದ್ವಾರ ಮುಟ್ಟುತ್ತದೆ. ಎಡಬಲಕ್ಕೆ ದಾರಿ ಉದ್ದಕ್ಕೂ ಕಲ್ಲು ಬಂಡೆಗಳುದೊಡ್ಡ ಪ್ರಮಾಣದಲ್ಲಿವೆ. ಶಿರಹಟ್ಟಿಯಿಂದ ಬೆಳ್ಳವರೆಗೆ ಯೋಗ್ಯವಾದ ಮಾರ್ಗವೂ ಇದೆ. ಹಾಗೂ ಆನೇಕಹಳ್ಳಿಗಳು ಇವೆ. ನಂತರ ಶಿರಹಟ್ಟಿ ಶಹರ ಸಮೀಪವಿದ್ದು ಇಲ್ಲಿ ಕೂಡಾ ಇತಿಹಾಸ ಸ್ಥಳ ಉಂಟು. ಹಾಗೂಶಿವಾಜಿ ಮಹಾರಾಜರ ಹಳೆದಾದ ಕೋಟೆ ಕೊತ್ತಲಗಳು ಅರಮನೆಗಳು ಇದ್ದಲ್ಲಿಯೇ ಬಿದ್ದು ಹೋಗಿವೆ.